# 87

# ಗೌತಮನ ಗೃಹತ್ಯಾಗ
## ಮತ್ತು
# ಸಿದ್ಧಾರ್ಥನ ಕಾರುಣ್ಯ

(ಎರಡು ಏಕಾಂಕಗಳು)

"ಗೌತಮನ ಗೃಹತ್ಯಾಗ"
—(ರಚಯಿತ: "ಅನಾಮಧೇಯ.")

"ಸಿದ್ಧಾರ್ಥನ ಕಾರುಣ್ಯ"
—(ಅನುವಾದಕ: ಎಲ್. ಎಸ್. ನಾಯಕ.)

1956.

ಒಂದಾಣೆ


ಮಾಲೆ

# ‘ಒಂದಾಣೆ ಮಾಲೆ’ಯ ಪ್ರಕಟಣೆಗಳು:

೧. *ಕೆಪ್ಪಟರಾಯ (ವಿನೋದ ಕಥೆ)
೨. *ನಾರೀಶ್ವರರು (ಏಕಾಂಕ ಪ್ರಹಸನ)
೩. ಕಳ್ಳನಿಗೆ ಸಂಭಾವನೆ (ದ್ವಿ. ಮುದ್ರಣ)
೪. *ಸದ್ರಿಸುಬ್ಬ (ಏಕಾಂಕ ಪ್ರಹಸನ)
೫. ಅದ್ಭುತ ತ್ಯಾಗ (ದ್ವಿತೀಯ ಮುದ್ರಣ)
೬. *ಚುನಾವಣೆ ಅರ್ಥಾತ್ ಬನಾವಣೆ
೭. *‘ಬೀಡಿ ಸೇದಬೇಡಿ’ ಮತ್ತು ‘ಅ ಮಗು’
೮. *ಇಂಗ್ಲಿಷ್-ಕನ್ನಡ ಅರ್ಥಕೋಶ
೯. ಲಂಚಕ್ಕೆ ಸಂಚಕಾರ (ದ್ವಿ. ಮುದ್ರಣ)
೧೦. *ಟಿಶ್ಯೂ ಔಷಧಿಗಳ ಕೈಪಿಡಿ.
೧೧. *ಶ್ರೀಕ್ಷೇತ್ರಧರ್ಮಸ್ಥಳ (ತೃ. ಮುದ್ರಣ)
೧೨. ಜೀವದ ಪ್ರೌಲ್ಯ ಮತ್ತು ಇತರ ಕಥೆಗಳು
೧೩. ಸತ್ತವನ ಸೇಡು ಮತ್ತು ಇತರ ಕಥೆಗಳು
೧೪. *ವೆಂಕಟನ ಸಂಕಟ (ಏಕಾಂಕ ಪ್ರಹಸನ)
೧೫. ಬಾಬಿಗೆ ಬಾಸಿಂಗ (ದ್ವಿತೀಯ ಮುದ್ರಣ)
೧೬. ವೇಣೂರಿನ ಗತವೈಭವ (ದ್ವಿ. ಮುದ್ರಣ)
೧೭. ಒಗಟುಗಳು [ದ್ವಿತೀಯ ಮುದ್ರಣ]
೧೮. ಜಗಳಗಂಟಿ ಮತ್ತು ಇತರ ಕಥೆಗಳು
೧೯. ರಥೋತ್ಸವ.
೨೦. ಕರಿನಾಯಿ ಮತ್ತು ಮುಪ್ಪು
೨೧. ಭಾರತದ ಮಹಾನಗರ (ದ್ವಿ. ಮುದ್ರಣ)
೨೨. ತಿರುಕ್ಕುರಲ್ (ದ್ವಿತೀಯ ಮುದ್ರಣ)
೨೩. ಸೂರ್ಯನ ಸಂಸಾರ (ಕಥೆಗಳು)
೨೪. ಭಾರತದ ಮಹಾನಗರ (ದ್ವಿ. ಮುದ್ರಣ)
೨೫. ಧೈರ್ಯ ಮತ್ತು ಇತರ ಸತ್ಯಕಥೆಗಳು.
೨೬. ಮಾರಾವತಾರ (ದ್ವಿತೀಯ ಮುದ್ರಣ)
೨೭. ಹಾಸವಿಲಾಸ (ನಗೆಹನಿಗಳು)
೨೮. ಸತ್ಯವಂತ ಬಾಜಿ (ದ್ವಿತೀಯ ಮುದ್ರಣ)
೨೯. ಜಾಣ್ಮೆಯ ಒಗಟುಗಳು
೩೦. ಜಾತಕ ಕಥೆಗಳು
೩೧. ಕಾರ್ಕಳದ ಚರಿತ್ರೆ
೩೨. ಮರ್ಜಿ (ಏಕಾಂಕ ಪ್ರಹಸನ)
೩೩. ದರ್ಶನದ ಕಥೆಗಳು
೩೪. ಅಳುವಿನ ಹೊಳೆ ಮತ್ತು ಕೇಶವಭೂಪ
೩೫. ಶರಾಬಿನ ಪೀಪಾಯಿಗಳು (ಕಥೆ)
೩೬. ಉಪದೇಶ ಶತಕ (ನೀತಿ ವಚನಗಳು)
೩೭. ನಿಮಗೆ ಗೊತ್ತಿದೆಯೇ?
೩೮. ಚತುರ ಚಮತ್ಕಾರ
೩೯. ಸತೀ ಸಾವಿತ್ರಿ (ದ್ವಿತೀಯ ಮುದ್ರಣ)
೪೦. ಆಭರಣಗಳ ಪೆಟ್ಟಿಗೆ, ಇತರ ಕಥೆಗಳು
೪೧. ಭಾರತದ ಮಂತ್ರಿಮಂಡಲಗಳು (ದ್ವಿ.
೪೨. ಕಾಲುಬಳೆಯ ಕಥೆ [ಮುದ್ರಣ)
೪೩. ಭಾರತದ ನಾಲ್ಕು ಕಲಶಗಳು
೪೪. ವ್ಯಸನದಿಂದ ಲಾಭ ಮತ್ತು ಇತರ
೪೫. ಸುಭಾಷಿತ [ಕಥೆಗಳು
೪೬. ೧೮೫೭ರ “ಸಿಪಾಯಿ ದಂಗೆ”
೪೭. ಅಕಾಂಡ ತಾಂಡವ (ರೇಡಿಯೋ ನಾಟಕ)
೪೮. ಸಾಹಸದ ಕಥೆಗಳು.
೪೯. ಸಂಜ್ಞಾ ಜ್ಞಾನ ಕೋಶ
೫೦. ಪಂಡಿತನ ಪಿಟೀಲು (ಕಥೆಗಳು)
೫೧. ಭೋಗಯಾತ್ರೆ (ವಿನೋಬಾ ತತ್ತ್ವ)
೫೨. ಸಂಗ್ರಾಮಸಿಂಹ (ಐ| ಕಥೆ)
೫೩. ಧರ್ಮಶಿಕ್ಷಾ (ಧರ್ಮ ತತ್ವಗಳು)
೫೪. ಮಹಾತ್ಮ (ಗಾಂಧೀಜಿ)
೫೫. ಮೀರಾಬಾಯಿ (ಏಕಾಂಕ ನಾಟಕ)
೫೬. ವೀರರಮಣಿ ಕರ್ಮದೇವಿ (ಕಥೆ)
೫೭. ಅರಳಿದ ನಗು (ವಿನೋದ ಕಥೆಗಳು)
೫೮. ಸಚಿತ್ರ ಜಪಾನ್
೫೯. ಚುಟ್ಟಬಿಟ್ಟ ಧಿಟ್ಟ (ಏಕಾಂಕ ಪ್ರಹಸನ)
೬೦. ನಿರಪರಾಧಿ (ರಾಜಾಜಿಯವರ ಕಥೆ)

(ಪುಟ 17ಕ್ಕೆ ಮುಂದುವರಿದಿದೆ)

# ಗೌತಮನ ಗೃಹತ್ಯಾಗ

ಮತ್ತು

# ಸಿದ್ಧಾರ್ಥನ ಕಾರುಣ್ಯ

(ಎರಡು ಏಕಾಂಕಗಳು).

---

## ಗೌತಮನ ಗೃಹತ್ಯಾಗ

ಸಿದ್ಧಾರ್ಥ: ನೋಡಿದೆಯಾ ಚೆನ್ನ?

ಚೆನ್ನ: ಏನು?

ಸಿದ್ಧಾರ್ಥ: ಪ್ರಕೃತಿದೇವಿಯ ಮುಖಮುದ್ರೆಯ ಅಂದವನ್ನು! ಹಿಮಗಿರಿಯ ಸುಂದರ ದೃಶ್ಯವನ್ನು! ಉತ್ತರದೆಸೆಯಲ್ಲಿ ನೋಡು, ಹಿಮರಾಜನ ರಾಜ್ಯಾಧಿಕಾರ! ಇತ್ತ, ನಮ್ಮ ಹಿಂದೆ, ಕಲಕಲ ನಿನಾದದಿಂದ ನಗುತ್ತಿರುವ ಪೂತ ಗಂಗಾಸ್ರೋತ! ಎತ್ತೆತ್ತಲೂ ವಸಂತರಾಜನ ನರ್ತನ! ಅದುವೇ ಪ್ರಕೃತಿಯರಸಿಯ ಸೌಂದರ್ಯದ ಹೆಚ್ಚಳಕ್ಕೆ ಕಾರಣ!

ಚೆನ್ನ: ಅಹುದು. ಯುವರಾಜ! ಈ ಸಂಜೆಯ ಸೊಬಗಿನಲ್ಲಿ ಪ್ರಕೃತಿಯು ಉಲಿಯುತ್ತಲಿದೆ. ಅದುವೇ ಗಂಗಾನದಿಯ ನೀರು ಉಕ್ಕುತ್ತಲಿದೆ. ಮಂದಮಾರುತನ ಸುಗಂಧಮಯ ಸುಖಸ್ಪರ್ಶದಿಂದ ತನುವೆಲ್ಲವೂ ಪುಲಕಿತವಾಗುತ್ತಿದೆ; ಹೃದಯದೊಳಗಿನ ಸಂತಸದೂಸರು ತಾನಾಗಿ ಹೊರಹೊಮ್ಮುವಂತಿದೆ.

ಸಿದ್ಧಾರ್ಥ: ಅಹುದು. (ಕುಳಿತಲ್ಲಿಂದ ಬಹುದೂರದ ವರೆಗೆ ತೋರಿ ಬರುತಿದ್ದ ಗಂಗಾನದಿಯ ಪುಣ್ಯಪಥದ ಸಿಂಹಾವಲೋಕನವನ್ನು ಮಾಡಿ) ಚೆನ್ನ! ನೋಡಲ್ಲಿ ದೂರದಲ್ಲಿ, ನದಿಯ ನೀರಲ್ಲಿ ಕೆಲೆದು ನಲಿಯುತ್ತಿರುವ ಹಂಸಯುಗ್ಮವನ್ನು! ಎಂತಹ ಆನಂದವಾಗಿದೆ ಅವುಗಳಿಗೆ! ಹೆಣ್ಣು ಹಂಸವು ತನ್ನಿನಿಯನ ಕೊರಳಿಗೆ ತೋಳನ್ನು ಚಾಚಿ, ಸುಖಸ್ಪರ್ಶರಸಾನುಭವವನ್ನು

ಹೊಂದುವುದನ್ನು ನೋಡು!........ಚೆನ್ನ; ಅಂತಹ ಆನಂದವು ಎಲ್ಲರಿಗೂ ಇರಬಹುದೇ?

ಚೆನ್ನ: ಇರುವುದೆಂತು ಯುವರಾಜ? ಆ ಹಂಸಯುಗ್ಮದಂತಹ ಅನುಕೂಲ ದಾಂಪತ್ಯವಿದ್ದರೆ ಅಂತಹ ಸಂತಸವಿರುವುದು. ಅನ್ಯಥಾ ಅಲ್ಲ. ಹಲವರಿಗೆ ಇಂತಹ ದಾಂಪತ್ಯವಿದ್ದರೂ ದಾರಿದ್ರ್ಯದ ದೆಸೆಯಿಂದ ತೊಳಲುವವರಿಗೆ ಇದರ ಸುಖದರಿವಾಗುವುದಿಲ್ಲ.

ಸಿದ್ಧಾರ್ಥ: ಅದೇಕೆ ಚೆನ್ನ?

ಚೆನ್ನ: ತಮ್ಮ ಜೀವನಕ್ಕಾಗಿ ಹಗಲಿರುಳು ದುಡಿದು ಬೆವರಿಳಿಸುವ ಜನರಿಗೆ ವಿಶ್ರಾಂತಿಯೆಲ್ಲಿಯದು, ದೇವ?........ರಾತ್ರಿಯೂ ವಿಶ್ರಾಂತಿ ದೊರೆಯದೆ, ದೀಪದ ಮಂದ ಪ್ರಕಾಶದಲ್ಲಿ ಗೇಯುದ್ದಣ್ಣವವರಿಗೂ ಕಡಿಮೆಯಿಲ್ಲ ....ಯುವರಾಜ! ಹಲವರು ಬನ್ನ ಬಡುವುದನ್ನು ಕಂಡರೆ, ಜೀವನದಲ್ಲಿಯೇ ಜುಗುಪ್ಸೆಯುಂಟಾಗುವುದು.

ಸಿದ್ಧಾರ್ಥ: ಜುಗುಪ್ಸೆಯಾಗಿ ಮಾಡುವದೇನನ್ನು ಚೆನ್ನ?

ಚೆನ್ನ: ಸನ್ಯಾಸಿಯಾಗಿ ಸಂಸಾರವನ್ನು ತೊರೆಯುವದು.

ಸಿದ್ಧಾರ್ಥ: ಅದೇಕೆ?

ಚೆನ್ನ: ಮೋಕ್ಷವನ್ನು ಹೊಂದಲು.

ಸಿದ್ಧಾರ್ಥ: ಏನು ಮೋಕ್ಷ? ಅದೇನು?

ಚೆನ್ನ: ಸಾವು ಬಂದನಂತರ, ಪರ........

ಸಿದ್ಧಾರ್ಥ: ಹಾ, ಸಾವು! ಅದೇನು?

ಚೆನ್ನ: ಯುವರಾಜ! ಈಗ ನಿಮಗಾಗಿ ಎಲ್ಲವನ್ನೂ ಅರುಹುವೆ. ನೀನೆಣಿಸಿರುವಂತೆ ಈ ಸಂಸಾರವು ಸುಖಮಯವಲ್ಲ. ಸುಖದುಃಖಗಳು ರಥದ ಗಾಲಿಯಂತೆ, ಹಗಲಿರುಳುಗಳಂತೆ, ಉರುಳುತ್ತಲಿವೆ.

ಸಿದ್ಧಾರ್ಥ: ಸುಖಮಯವಲ್ಲ?........ಸುಖವಿಲ್ಲ?

ಚೆನ್ನ: ಅಹುದು. ಸುಖವಿಲ್ಲ. ಈಗ ಕಾಣಬರುವ ಈ ಸುಖವು ಮರುಭೂಮಿಯಲ್ಲಿನ ಮೃಗಜಲದಂತೆ, ತಿರುಕನ ಕನಸಿನಂತೆ! ಯುವರಾಜ! ತಮ್ಮೊಡನೆ ಈಗ ಇದ್ದು, ಸಂತಸದಿಂದ ನಲಿಯುತ್ತಿರುವವರೆಲ್ಲರೂ ಒಂದು ದಿನ ಸಾವಿಗೆ ಸೋತು, ಧೂಳೀದೂಸರವಾಗುವರು.

ಸಿದ್ಧಾರ್ಥ: ಅಂದರೆ?

ಚೆನ್ನ: ತಾವು ಯಾವುದನ್ನು ಈಗ ಸುಖವೆಂದು ಬಗೆದಿರುವಿರೋ ಅದು ಸುಖವಲ್ಲ; ಯಾರನ್ನು ತಮ್ಮ ಬಂಧುಬಾಂಧವರೆಂದು ಎಣಿಸಿಕೊಂಡಿರುವಿರೋ ಅವರು ಶಾಶ್ವತರಲ್ಲ; ನಿಮ್ಮನ್ನು ತೊರೆಯತಕ್ಕವರು.

ಸಿದ್ಧಾರ್ಥ: ಎಂದು?

ಚೆನ್ನ: ಸಾವು ಬಂದಂದು! ಯುವರಾಜ! ಈ ದೇಹವು ಮೃಣ್ಮಯ; ಅದು ಮಣ್ಣಿನಲ್ಲೇ ಕೂಡಬೇಕಾದುದು ವಿಧಿಯ ನಿಯಮ. ಆದರೆ ಮಾಡಿದ ಕರ್ಮಕ್ಕೆ ಅನುಸಾರವಾಗಿ, ಸುಖವಾಗಿಯೊ ಅಥವಾ ವಿಲವಿಲನೆ ಒದ್ದಾಡಿಯೊ ಮರಣವನ್ನೈದಬೇಕಾಗುವುದು.

ಸಿದ್ಧಾರ್ಥ: ವಿಲವಿಲನೆ ಒದ್ದಾಡಿ?

ಚೆನ್ನ: ಅಹುದು. ಯುವರಾಜ! ಎಲ್ಲಿದೆ ಆಗಿನ ಆ ಹಂಸಯುಗ್ಮ?

ಸಿದ್ಧಾರ್ಥ: ಅದೋ ಅಲ್ಲಿ.

ಚೆನ್ನ: ದಿಟ್ಟಿಸಿ ನೋಡಲ್ಲಿ! ಏನನ್ನು ಕಾಣುವೆಯೋ ಅದೇ ಜೀವನದ ಸಾರ! (ಸಿದ್ಧಾರ್ಥನು ದಿಟ್ಟಿಸಿ ನೋಡುವನು. ಹಂಸಯುಗ್ಮವು ವಿಹರಿಸುತಿದ್ದ ಅನತಿ ದೂರದಲ್ಲಿ ಬೇಟೆಗಾರನೊಬ್ಬನು ಬಿಲ್ಲಿಗೆ ಬಾಣವನ್ನು ಜೋಡಿಸಿ, ನಿಂತುದು ತೋರುವುದು. ಆ ಬಿಲ್ಲಿನಿಂದ ಹೊರಟ ಬಾಣವು ಗಂಡು ಹಂಸದ ಎದೆಯನ್ನು ಹೊಗುವುದು. ಆ ಹತವಾದ ಹಂಸವು ನೀರಿಗೆ ಬೀಳುವುದು.)

ಚೆನ್ನ: ಕಂಡೆಯಾ, ಯುವರಾಜ?

ಸಿದ್ಧಾರ್ಥ: ಅಹುದು. ಹಾ, ಪಾಪಮಯ ಸಂಸಾರ!

ಚೆನ್ನ: ಅಹುದು. ಹಾ, ಪಾಪಮಯ ಸಂಸಾರ! ಅದರ ಉದ್ಧಾರಕ್ಕಾಗಿಯೇ ನಿನ್ನ ಜನನವಾಗಿದೆ; ಯುವರಾಜ! ಆ ಬಡಬೇಡನು ತನ್ನ ಹೊಟ್ಟೆಗಾಗಿ ಆ ಹಂಸವನ್ನು ಕೊಂದು, ಎಂತಹ ಪಾತಕವನ್ನು ಕಟ್ಟಿಕೊಂಡನು! ಬಲ್ಲೆಯಾ? ಆ ದುಷ್ಕರ್ಮದ ಫಲವೇನು ಬಲ್ಲೆಯಾ?

ಸಿದ್ಧಾರ್ಥ: ಇಲ್ಲ.

ಚೆನ್ನ: ಸತ್ತನಂತರ, ಪಾಪಿಷ್ಠರಿಗಾಗಿಯೇ ಏರ್ಪಟ್ಟ ನರಕವೆಂಬುದೊಂದು ಸ್ಥಾನವಿದೆ. ಅಲ್ಲಿ ವೃಶ್ಚಿಕಾವೃತರಾಗಿ ಒಂದು ಕೊಲೆಗಾಗಿ ಒಂದು ವರ್ಷ ನರಳುವುದೇ ಅದಕ್ಕೆ ಪ್ರಾಯಶ್ಚಿತ್ತ!

ಸಿದ್ಧಾರ್ಥ: ಒಂದು ವರ್ಷ........ಚೇಳುಗಳ ಕಡಿತವನ್ನು ಸಹಿಸಿ ಕೊಂಡು....? ಬೇಡ! ಅಯ್ಯೋ....ಬೇಡ!....ಈ ನರಜನ್ಮವೇ ಹಾಳು! ಬಾಳೂ ಹಾಳು! ನನ್ನ ಯಶೋಧರೆ....ನನ್ನ ಮುದ್ದು ಕೂಸು....ಒಂದು ದಿನ ನರಳಿ ನರಳಿ ಸಾಯುವುದು?....ಭಯಂಕರ....ಭಯಂಕರ!....ಯಾವ ಸುಖವಿದು? ಸುತ್ತಲೂ ಪರಿಜನರಿರುವರು....ತಂದೆತಾಯಿಗಳಿರುವರು.... ಆದರೂ ಸುಖವಿಲ್ಲ....ಸಂಸಾರವು ಸುಖಮಯವಲ್ಲ....

(ಫಕ್ಕನೆ ತಿರುಗಿ ನೋಡುವನು; ಚೆನ್ನನಿಲ್ಲ)

ಚೆನ್ನಾ!....ಚೆನ್ನಾ!....ಎತ್ತ ಹೋಗಿದ್ದಾನೆ ಚೆನ್ನ?

(ಚೆನ್ನನು ಬರುವುದು ಕಾಣಿಸುವುದು)

ಚೆನ್ನ: (ಪ್ರವೇಶಿಸಿ) ಅರಮನೆಯಲ್ಲಿದ್ದೆ. ಏಕೆ ಕರೆದಿರಿ?

ಸಿದ್ಧಾರ್ಥ: ಚೆನ್ನ! ನಿನ್ನ ಆ ಉಪದೇಶವನ್ನು ಇನ್ನೊಮ್ಮೆ ಅರುಹು.... ಚೆನ್ನ! ಈ ಜೀವನವು ಸುಖಮಯವಲ್ಲ!....ಚೆನ್ನ! ಇನ್ನೊಮ್ಮೆ ಹೇಳು ಆ ಮಧುರವಾಕ್ಯಗಳನ್ನು!....ಚೆನ್ನ!

ಚೆನ್ನ: (ಅಚ್ಚರಿಯಿಂದ) ನಾನರಿಯೆ, ದೇವ; ಎಂತಹ ಉಪದೇಶ?

ಸಿದ್ಧಾರ್ಥ: (ಚೆನ್ನನನ್ನು ದಿಟ್ಟಿಸಿನೋಡಿ, ಹುಚ್ಚನಂತೆ ಆತನ ಕಾಲಿಗೆ ಬಿದ್ದು) ಚೆನ್ನ! ನೀನೆ ನನ್ನ ಗುರು! ಚೆನ್ನ; ಎಲ್ಲಿ ಹೋಯಿತು ನಿನ್ನ ಆ ಉಪದೇಶಾಮೃತ?.... ಇನ್ನೊಮ್ಮೆ ಕೇಳಲೀಯು....ಅಯ್ಯೋ!

ಚೆನ್ನ: (ಮತ್ತೂ ಅಚ್ಚರಿಯಿಂದ) ಏನಿದು ವಿಪರೀತ; ಯುವರಾಜ? ನಾನೆಲ್ಲಿಯ ಗುರು?....ಯುವರಾಜ! ನಾನು ನಿನ್ನ ಪಾದಸೇವಕ!

ಸಿದ್ಧಾರ್ಥ: ಚೆನ್ನ....ಅಯ್ಯೋ....ಚೆನ್ನ! ಒಮ್ಮೆ ಉಸುರು ಜೀವನದ ಸಾರವನ್ನು!....ಯಾವ ರೀತಿಯಲ್ಲಿ ಆ ಬೇಡನು ಹಂಸಯುಗ್ಮದಲ್ಲಿನ ಒಂದು ಹಂಸವನ್ನು ಕೊಂದು, ಕೆಡಹಿ, ವೃಶ್ಚಿಕದಂಶನದ ಪ್ರಾಯಶ್ಚಿತ್ತವನ್ನು ಅನು ಭವಿಸಿದ?....ಚೆನ್ನ....ಅಯ್ಯೋ....ಚೆನ್ನ! ನಿಸ್ಸಾರ ಸಂಸಾರ!!

ಚೆನ್ನ: (ಸ್ವಗತ) ರಾಜನು ತನ್ನ ಮಗನ ಮನ ತಿರುಗಲೆಂದು ಸುತ್ತಲೂ ಅಷ್ಟೈಶ್ವರ್ಯವೆರಚಿದುದು ನಿಷ್ಫಲವಾಯಿತು. (ಪ್ರಕಾಶ) ಯುವರಾಜ! ಏಳೋಣಾಗಲಿ! ಯುವರಾಜ್ಞಿಯುವರು ದಿಗಿಲುಗೊಳ್ಳುತ್ತಿರ ಬಹುದು.

ಸಿದ್ಧಾರ್ಥ: ಚೆನ್ನ! (ಆತನನ್ನು ದಿಟ್ಟಿಸುವನು) ಆಗ ಉಪದೇಶವಿತ್ತ ನಾಲಗೆಯೇ ಏನು ಅದು, ಈಗ ಸಂಸಾರದ ಸಾರ್ಥಕ್ಯವನ್ನು ಅರುಹು ತ್ತಿರುವುದು?

ಚೆನ್ನ: ನಾನರಿಯೆ, ದೇವ!

ಸಿದ್ಧಾರ್ಥ: (ಮುಗದೊಮ್ಮೆ ದಿಟ್ಟಿಸಿ ನೋಡಿ) ಅಯ್ಯೋ....ನೀನಲ್ಲ.... ನೀನಲ್ಲ! ನಿನ್ನಲ್ಲಿ ಜ್ಞಾನದ ತೇಜ ಪ್ರಕಾಶವಾಗಿಲ್ಲ. ನೀನಿನ್ನೂ ಮೂಢ....! ಪಾಪಮಯ ಜಗತ್ತಿನಲ್ಲಿದ್ದು ತೊಳಲಾಡತಕ್ಕವನು....ಅಯ್ಯೋ....ನೀನಲ್ಲ; ನನಗೆ ಉಪದೇಶಾಮೃತವನ್ನು ಪಾನಮಾಡಿಸಿದವನು ಛದ್ಮವೇಷಧಾರಿಯಾದ ನನ್ನ ಗುರು! . . . ನನ್ನ ಗುರು!

ಚೆನ್ನ: ಏನಿದು ಹುಚ್ಚು?....

ಸಿದ್ಧಾರ್ಥ: ಅಹುದು ಹುಚ್ಚು; ಚೆನ್ನ! ಸಂಸಾರದ ಪಾಶದಲ್ಲಿ ಬಿದ್ದು ನರಳುವವರೆಲ್ಲರಿಗೂ ಹುಚ್ಚು . . . . ಅಯ್ಯೋ . . . ನೋಡಲ್ಲಿ . . . . ಅದಾರು?

ಚೆನ್ನ: (ನೋಡಿ) ಅವನೋರ್ವ ನಿರ್ಭಾಗ್ಯ ಕುಷ್ಠರೋಗಿ.

ಸಿದ್ಧಾರ್ಥ: (ದಿಟ್ಟಿಸಿ) ಅಹುದು; ಕುಷ್ಠರೋಗಿ! ಅಂಗಾಂಗಗಳೆಲ್ಲಾ ಕೊಳೆತು ನಾರುತ್ತಿವೆ. ನರಳಿ ನರಳಿ ಆತನ ತನುವು ಬೇಯುತ್ತಿದೆ; ಸಂಸಾರದ ವಡವಾಗ್ನಿಯಿಂದ ಬೆಂದು, ಬೂದಿಯಾಗುತ್ತಿದೆ. ಚೆನ್ನ....! ಇದಕ್ಕೆ ನಿರಸನವಿಲ್ಲವೇ?

ಚೆನ್ನ: ನಿರಸನವೆಲ್ಲಿಂದ ದೇವ? ಆತನು ತಾನು ಮಾಡಿದ ಪಾಪ ಕರ್ಮಗಳ ಫಲವನ್ನು ಭೋಗಿಸುತಿದ್ದಾನೆ.

ಸಿದ್ಧಾರ್ಥ: ಅವನಿಗೆ ಬಂಧುಬಾಂಧವರಾರೂ ಇಲ್ಲವೇ?

ಚೆನ್ನ: ಇದ್ದರು; ಇರುವರು. ಆದರೆ ಕುಷ್ಠರೋಗಿಯ ಬಳಿಗೆ ಬರಲಾರರು.

ಸಿದ್ಧಾರ್ಥ: ಏಕೆ? ಹಿಂದೆ ಬಂಧುವಾಗಿದ್ದ ಆ ದೇಹವು ರೋಗಪೂರಿತವಾದರೆ ಅದರಲ್ಲಿನ ಬಂಧುತ್ವವು ಬಿಟ್ಟುಹೋಗುವುದೇ?....ಅಯ್ಯೋ....ಭಯಂಕರ!....ನನಗೂ ಒಮ್ಮೆ ಆ ರೋಗವು ತಗಲಿದರೆ, ನನ್ನ ಕೈಯನ್ನೂ ಬಿಡುವಿರೇ ನೀವು?

ಚೆನ್ನ: ಎಂತು ಬಿಡುವುದು,ಯುವರಾಜ! ನಾವು ನಿಮ್ಮ ಅಡಿಯಾಳು....

ಸಿದ್ಧಾರ್ಥ: ಸಾಕು; ಚೆನ್ನ! ಹೆಚ್ಚು ಮಾತನಾಡಿ ಮನಸ್ಸಿನ ಉದ್ವೇಗ ವನ್ನು ಹೆಚ್ಚಿಸದಿರು.... ಅಯ್ಯೋ.... ಅವನು ಪಾಪ! ನರಳುತಿದ್ದಾನೆ.... ಭಯಂಕರ! (ದೂರ ನೋಡಿ) ಚೆನ್ನ....ಅದಾರು? ಆಹತನೇ? ಮಂಚದ ಮೇಲೆ ಮಲಗಿಸಿ, ಕೊಂಡೊಯ್ವರೆಲ್ಲಿಗೆ; ಚೆನ್ನ?

ಚೆನ್ನ: ಸಾವು ಬಂ....

ಸಿದ್ಧಾರ್ಥ: ಸಾವು?....ಅಯ್ಯೋ....ಕೈಕಾಲ್ಗಳನ್ನೇಕೆ ಬಿಗಿದಿದ್ದಾರೆ?.... ಚೆನ್ನ! ಎಲ್ಲಿಗೊಯ್ವರವನನ್ನು?

ಚೆನ್ನ: ಮಸಣಕ್ಕೆ! ಅಲ್ಲಿ ಮಣ್ಣುಗೂಡಿಸುವರು.

ಸಿದ್ಧಾರ್ಥ: ಅಹುದು. ಚೆನ್ನ! ಅಗ ನಿನ್ನ ವೇಷವನ್ನು ಪರಿಧಾನ ಮಾಡಿಕೊಂಡು, ಆರೋ ಅಜ್ಞಾತ ಮಹಾತ್ಮನಾಗವಿಸಿದ್ದನು. ಆತನು ಹೀಗೆಯೇ ಹೇಳಿದ್ದ. ಮೃಣ್ಮಯ ದೇಹವಿದು; ಮಣ್ಣಿನಲ್ಲೊಂದುಗೂಡುವು ದೆಂದು ಅಯ್ಯೋ....ನಾನೂ ಒಮ್ಮೆ ಹೀಗೆಯೇ!....ಆಗ....ಭಯಂಕರ! ಈಗ ಪರಿಜನರಿದ್ದಾರೆ.... ದಾಸದಾಸಿಯರಿದ್ದಾರೆ.... ಹೆಂಡತಿಯಿದ್ದಾಳೆ.... ಚಿಕ್ಕ ಕೂಸೂ ಇದೆ....ತಂದೆತಾಯಿಗಳಿದ್ದಾರೆ! ಇವರೆಲ್ಲ, ನಾನು ಸತ್ತರೆ ನನ್ನೊಡ ನೆಯೇ ಬರುವರೇ ಚೆನ್ನ?

ಚೆನ್ನ: ಹೇಗೆ ಬರುವರು ಯುವರಾಜ? ಆದರೆ ಅವರಿಗೂ ಒಂದು ದಿನವಿರುವುದು; ಅಂದು ಬರುವರು.

ಸಿದ್ಧಾರ್ಥ: ಸುಡು ಆ ದಿನವನ್ನು!........ಇಂದು........ಏಕೆ? ಈಗಲೇ ನಾನು ಸತ್ತರೆ, ನನ್ನೊಡನೆ ನೀನು ಬರುವಿಯೇ ಚೆನ್ನ?

(ಚೆನ್ನನು ಭೀತಿಯಿಂದ ನಡುಗುವನು)

ಚೆನ್ನ! ಬೆದರದಿರು. ನಿಜವನ್ನು ಹೇಳು. ಬರುವೆಯಾ?

ಚೆನ್ನ: (ತೊದಲ್ನುಡಿಯಿಂದ) ನಾನು ಹೇಗೆ ಬರಲಿ; ಯುವರಾಜ? ಮನೆಯಲ್ಲಿ ಹೆಂಡತಿ, ಮಗು! ಅದೂ ಒಂದೇ! ಅವರನ್ನು ಹೇಗೆ ತೊರೆಯಲಿ?

ಸಿದ್ಧಾರ್ಥ: (ನಕ್ಕು) ಅಹುದು. ಹೆಂಡತಿ ಮಕ್ಕಳು! ನೀನು ಅವರನ್ನು ತೊರೆಯಲಾರೆ! ಆದರೆ ನಾನು ತೊರೆಯುವೆ!........ಯಶೋಧರೆ

ಯನ್ನೂ ತೋರೆಯುವೆ........ಕೂಸನ್ನೂ ತೋರೆಯುವೆ! ಅಷ್ಟೈಶ್ವರ್ಯ ಗಳನ್ನೂ ಎಡಕಾಲಿಂದೊದೆವೆ! ಬಲ್ಲೆಯಾ ಚೆನ್ನ?

ಚೆನ್ನ: ............ ............ ............

ಸಿದ್ಧಾರ್ಥ: ಏಕೆ ಸುಮ್ಮನಾದೆ? ಚೆನ್ನ! ಈ ಜಘನ್ಯ ಸಂಸಾರದೆಣಿಕೆ ಯಿಂದ ನನ್ನ ಮನಸ್ಸು ತ್ರಸ್ತವಾಗಿದೆ........ಚೆನ್ನ! ಶಾಂತಿಯೀವೆಯಾ?........ ಚೆನ್ನ! ನಿನ್ನಿಂದ ಶಾಂತಿಯೀಯಲು ಸಾಧ್ಯವೇ?........ಇಲ್ಲ........ನೀನು ಆ ಚೆನ್ನನಲ್ಲ. ನಿನ್ನಿಂದ ಸಾಧ್ಯವಿಲ್ಲ;........ಹೋಗಿನ್ನು ಚೆನ್ನ!

(ಚೆನ್ನ ಹೋಗುವನು)

ಸಿದ್ಧಾರ್ಥ: (ಶತಪಥ ಸುತ್ತುತ್ತಾ) ಅಯ್ಯೋ........ಸಂಸಾರವೇ?........ ಪಾಪಮಯ ಸಂಸಾರ!............ಪಾಪಮಯ ಸಂಸಾರ!!............ಯಾವ ಬಗೆಯಿಂದ ಈ ಪಾಪಮಯ ಸಂಸಾರವು ಉದ್ಧೃತವಾಗಬಹುದು?........ ಗುರುವರ! ಗುರುವರ!........ಎಲ್ಲಿರುವೆ ಗುರುವರ?

(ಅಲ್ಲೇ ಇರುವ ಬಂಡೆಯ ಮೇಲೆ ಕುಳ್ಳಿರುವನು)

ಗುರುವೆ! ನನ್ನ ಮನಸ್ಸಿಗೆ ಶಾಂತಿಯನ್ನೀಯು!........ಎಲ್ಲಿ ಅರಸಲಿ ಶಾಂತಿಯನ್ನು?..........ಅಯ್ಯೋ..........ಜನರೆಲ್ಲ ನರಕದ ದೆವ್ವಗಳಂತೆ ಪಾಪಾಚರಣೆಗೆ ತೊಡಗಿ, ವ್ಯರ್ಥ ಹಾನಿ ಹೊಂದುತಿದ್ದಾರೆ........ಗುರುವೇ! ಅವರನ್ನು ನರಕದಿಂದ ಉದ್ಧರಿಸಲು ಪಥವೊಂದನ್ನು ತೋರು.

(ಓರ್ವ ಯೋಗಿಯು ಪ್ರವೇಶಿಸುವನು)

ಗುರುವರ! ಶಾಂತಿಯೆಲ್ಲಿ? ಶಾಂತಿಯೆಲ್ಲಿ?........ಗುರುವರ! ಆ ಕುಷ್ಠ ರೋಗವು ಎಲ್ಲರಿಗೂ ಹಿಡಿಯುವುದೇ?

ಯೋಗಿ: ಇಲ್ಲ. ತಮ್ಮ ಕರ್ಮಫಲಕ್ಕೆ ತಕ್ಕಂತೆ ರೋಗರುಜೆ!

ಸಿದ್ಧಾರ್ಥ: ಮತ್ತಾ ಸಾವು?

ಯೋಗಿ: (ನಕ್ಕು) ಬೇಕೆಂದರೂ ಬೇಡವೆಂದರೂ ಎಲ್ಲರಿಗೂ ಇದೆ.

ಸಿದ್ಧಾರ್ಥ: ಗುರುವರ! ನೀನೇಕೆ ಈ ವೇಷವನ್ನು ಪರಿಧಾವಿಸಿರುವೆ?

ಯೋಗಿ: ಬಾಲ! ನಿನಗಾಗಿ ಆಗ ಚೆನ್ನನ ವೇಷದಿಂದ ಬಂದೆ. ಇದು ಮೋಕ್ಷೇಚ್ಛುಗಳ ಪರಿಧಾವನ!

ಸಿದ್ಧಾರ್ಥ: ನಡೆ, ಗುರುವರ!............ನೀನು ನನಗೆ ಶಾಂತಿಯ ನೆಲೆಯನ್ನು ತೋರುವೆಯಾ? ಹಾಗಾದರೆ ನಡೆ, ಬರುವೆನು.

ಯೋಗಿ: ಬಾ.

(ಸಿದ್ಧಾರ್ಥನು ಯೋಗಿಯ ಮುಂದೆ ಮೊಣಕಾಲೂರುವನು. ಮತ್ತೆ ತಲೆಯೆತ್ತಿದಾಗ, ಯೋಗಿಯು ಅಂತರ್ಧಾನ)

ಸಿದ್ಧಾರ್ಥ: ಯೋಗಿ!........ಗುರುವರ!........ಗುರುವರ!........ಎತ್ತ ತೆರಳಿದೆ?........ಅಯ್ಯೋ........ನೀನು ತೋರುವ ಶಾಂತಿಯೆಲ್ಲಿ?........ ಗುರುವರ........ಶಾಂತಿಯೆಲ್ಲಿ?

(ಪ್ರವೇಶ: ಚೆನ್ನ, ಯಶೋಧರೆ ಮತ್ತು ಕೂಸು)

ಯಶೋಧರೆ: ಚೆನ್ನ. ಎಲ್ಲಿರುವನೆನ್ನ ಪ್ರಿಯ?

ಚೆನ್ನ: ಅದೋ ಅಲ್ಲಿ! ಮರುಳರಂತಿರುವರು.

ಸಿದ್ಧಾರ್ಥ: ಗುರುವರ........ಶಾಂತಿಯೆಲ್ಲಿ?........ಅಯ್ಯೋ........ ಸಂಸಾರದ ಬೇಗೆ!

ಯಶೋಧರೆ: (ಮುಂದೆ ಬಂದು) ಪ್ರಿಯಾ, ಇದೋ ನಾನಿಲ್ಲಿರುವೆ.

ಸಿದ್ಧಾರ್ಥ: (ದಿಟ್ಟಿಸಿ ನೋಡಿ) ಯಾರು ನೀನು?

ಯಶೋಧರೆ: (ದಿಗ್ಭ್ರಮೆಯಿಂದ) ನಾನು ತಮ್ಮ ಚರಣದಾಸಿ— ಯಶೋಧರೆ!

ಸಿದ್ಧಾರ್ಥ: ಏಕೆ ಬಂದೆ?

ಯಶೋಧರೆ: ಏಕಿಂತು ನುಡಿಯುವಿರಿ, ನಾಥ? ಆಯಾಸವಾಗಿರ ಬಹುದು; ನಡೆಯಿರಿ. ಅರಮನೆಗೆ ಹೋಗೋಣ.

ಸಿದ್ಧಾರ್ಥ: ಛಿ! ಬರಲಾರೆ! ಅರಮನೆಯಲ್ಲಿ ಶಾಂತಿಯಿಲ್ಲ; ಎಲೆಮನೆಯಲ್ಲಿ!

ಯಶೋಧರೆ: ಶಾಂತಿ!........ಹಾ ಪ್ರಿಯಾ! ಅರಮನೆಯಲ್ಲೇ ಇದೆ ಶಾಂತಿ! ನಾಥ; ಶಾಂತಿಯು ನನ್ನ ಬಾಹು ಪಾಶದಲ್ಲಿದೆ; ಉದ್ಯಾನದಲ್ಲಿನ ಉತ್ಫುಲ್ಲ ಪುಷ್ಪಸಂಚಯಗಳಲ್ಲಿದೆ. ಪ್ರಾಣಕಾಂತ, ಶಾಂತಿಯು ನನ್ನ ಕೋಮಲ ತನುಸ್ಪರ್ಶದಲ್ಲಿದೆ, ಮತ್ತೀ ಮಗುವಿನ ಎಳೆನಗೆಯಲ್ಲಿದೆ.

ಸಿದ್ಧಾರ್ಥ: (ಯಶೋಧರೆಯ ಮಾತುಗಳನ್ನು ಕೇಳಿ ಭ್ರಮಿತ ನಾಗಿರುವನು.)

ಯಶೋಧರೆ: ಏಕೆ ಪ್ರಿಯಾ, ಮೌನ? ನನ್ನ ಮೇಲೆ ನಂಬುಗೆ ಯಿಲ್ಲವೇ? ನಡೆಯಿರಿ ಅರಮನೆಗೆ.

ಸಿದ್ಧಾರ್ಥ: (ಭ್ರಮಿತನಂತೆ ಯಶೋಧರೆಯನ್ನಪ್ಪಿಕೊಂಡಿರುವನು.) ಯಶೋಧರೆ; ನಿನ್ನ ತನುವೆಷ್ಟು ಕೋಮಲವಾಗಿದೆ!

ಯಶೋಧರೆ: ಅಹುದು, ನಡೆಯಿರಿ. ಶಾಂತಿಯ ನೆಲೆಯನ್ನು ತೋರಿಸುತ್ತೇನೆ.

(ನಿಷ್ಕ್ರಮಣ-ಸಿದ್ಧಾರ್ಥ; ಯಶೋಧರೆ, ಕೂಸು, ಚೆನ್ನ)

(ಪ್ರವೇಶ: ಯೋಗಿ)

ಯೋಗಿ: ಹಹ್ಹಹ್ಹ! ಲೋಕೋದ್ಧಾರಕ್ಕಾಗಿ ಜನಿಸಿದವನು ಮನುಜನಂತೆ ವರ್ತಿಸುವುದೇ?........ಸಿದ್ಧಾರ್ಥ! ಇಂದು ರಾತ್ರಿಯ ತನಕ ನಿನ್ನ ಪ್ರಿಯೆಯ ಶಾಂತಿಯಲ್ಲಿ ವಿಹರಿಸು. ಅನಂತರ ಮೋಕ್ಷ ಸಾಮ್ರಾಜ್ಯದ ಶಾಂತಿ! (ಜವನಿಕಾ ಪತನ)

## ದೃಶ್ಯ ೨.

(ಯುವರಾಜ ಸಿದ್ಧಾರ್ಥನ ಶಯ್ಯಾಗಾರ. ಸಮಯ: ಮಧ್ಯರಾತ್ರಿ, ಸಿದ್ಧಾರ್ಥನ ಪತ್ನಿ ಯಶೋಧರೆ ಮತ್ತು ಪುತ್ರ ರಾಹುಲ-ಗಾಢ ನಿದ್ರೆಯಲ್ಲಿರುವರು. ಸಿದ್ಧಾರ್ಥನು ಎದ್ದು ಕುಳಿತು ಯೋಚನಾಮಗ್ನನಾಗಿರುವನು.)

ಸಿದ್ಧಾರ್ಥ: ಏನೀ ತುಮುಲ! ಅಂತರ್ಯವು ಅಶಾಂತವಾಗಿದೆ! ನೂರಾರು ಆಲೋಚನಾತರಂಗಗಳು ನಾಲ್ದೆಸೆಗಳಿಂದಲೂ ಎದ್ದೆದ್ದು ಬಡೆಯುತ್ತಿವೆ—ಆದರೆ, ಯಾವುದೂ ಸ್ಪಷ್ಟವಿಲ್ಲ! ಏನೂ ಕಾಣಿಸುತ್ತಿಲ್ಲ!

(ಮಂಚದಿಂದ ಕೆಳಗಿಳಿದು ನಿಂತು ಆಲೋಚಿಸುವನು.)

ಕಾಣಿಸುವುದಿಲ್ಲವೇ? ಕಾಣಿಸುತ್ತಿದೆ, ಕಾಣಿಸುತ್ತಿದೆ! ಸಾವು-ನೋವುಗಳಿಂದ ನರಳುವ ಜನಕೋಟಿ ಕಾಣಿಸುತ್ತಿದೆ! ನೋವಿನಿಂದ ಭೂಮಿಗೆ ಬೀಳುವ ಶಿಶು ಕಾಣುತ್ತಿದೆ! ಅಜ್ಞಾನದಿಂದ ನಗುವ ನಿರಪರಾಧಿ ಮಗು ಕಾಣುತ್ತಿದೆ! ಉಲಿದು ನಲಿವ ಬಾಲಕನ ಹಿಂದೆಯೂ ಮುಂದೆಯೂ ಅವನರಿಯದಂತೇ, ಜನರು ನೋಡಲಾರದಂತೇ, ಸಾವು-ನೋವುಗಳೂ ನೃತ್ಯ ಮಾಡುತ್ತಿರುವುದು ಕಾಣುತ್ತಿದೆ! ತಾರುಣ್ಯದ ಭರದಲ್ಲಿ, ಮದದಿಂದ ಮೆರೆವ ಯುವಕನ ಹಿಂದೆ ನರಳುವ, ಜರ್ಝರಿತ ದೇಹದ ಕುರೂಪಿ-ಕೃಶ-ವೃದ್ಧನು ಕಾಣಿಸುತಿದ್ದಾನೆ! ಧನಸಂಚಯದ ಉನ್ಮಾದದಲ್ಲಿ ಸಹೋದರಭಾವವನ್ನು ಮರೆತ ಗೃಹಸ್ಥನು ತಾನು-ತನ್ನ ಪತ್ನಿ ಮತ್ತು ತನ್ನ ಪುತ್ರಪುತ್ರಿಯರು

ಎಂಬೀ ಚಿಕ್ಕ ಪ್ರಪಂಚದಲ್ಲಿ, ಎಲ್ಲವೂ ಅಶಾಶ್ವತವೆಂದು ತಿಳಿಯದೆ ಮೃತ್ಯುವಿನೆಡೆಗೆ ಧಾವಿಸುತ್ತಿರುವುದು ಕಾಣಿಸುತ್ತಿದೆ!

(ಆ ಕೂಡಲೇ,—ನಿದ್ರಿಸುವ ಯಶೋಧರೆ ಮತ್ತು ರಾಹುಲನ ಕಡೆ ನೋಡಿ)

ಪತ್ನಿ? ಪುತ್ರ?....ಯಶೋಧರೆ, ರಾಹುಲ! ನನ್ನ ಅರ್ಧಾಂಗಿ ಯಶೋಧರೆ? ನನ್ನ ರಕ್ತಮಾಂಸಗಳಾಗಿರುವ ರಾಹುಲ? ಮೊನ್ನಿನ ತನಕ ಯಶೋಧರೆ ಯಾರು, ನಾಳೆ ಅವಳು ಯಾರು? ಮೊನ್ನಿನ ತನಕ ರಾಹುಲನಾರು, ನಾಳೆ ಯಾರು? ಯುವರಾಜ ಪತ್ನಿ—ಯುವರಾಜ ಪುತ್ರ! ಇವರನ್ನೂ ಸಾವು-ನೋವುಗಳು ಬಿಟ್ಟಿರುವುವೇ? ಇಲ್ಲ, ಇಲ್ಲ! ಚೆನ್ನನು ಹೇಳಿದ್ದಾನೆ—'ಈಗ ಇದ್ದು, ಸಂತಸದಿಂದ ನಲಿಯುತ್ತಿರುವವರೆಲ್ಲರೂ ಒಂದು ದಿನ ಸಾವಿಗೆ ಸೋತು, ಧೂಳೀದೂಸರವಾಗುವರು'—ಎಂದು.

(ಪುನಃ ಒಂದು ಕ್ಷಣ ಆಲೋಚಿಸಿ)

ನಾನಿಲ್ಲಿ ನಿದ್ರಿಸಲಾರೆ, ಇಲ್ಲಿ ಉಳಿಯಲಾರೆ. ಜಗತ್ತು ನರಳುತ್ತಿರುವಾಗ ನಾನಿಲ್ಲಿ ಮೃಷ್ಟಾನ್ನವನ್ನುಂಡು ಭೋಗಗಳಲ್ಲಿ ಪ್ರಪಂಚವನ್ನು ಮರೆತು ಇರಲಾರೆ. ನಾನು ಜನಕೋಟಿಗಾಗಿ ಶಾಶ್ವತಸುಖವನ್ನರಸಬೇಕು—ಸತ್ಯವನ್ನರಸಬೇಕು, ಶಾಂತಿಯನ್ನರಸಬೇಕು.

(ಪುನಃ ಶಯ್ಯೆಯ ಬಳಿಗೆ ಹೋಗಿ, ನಿದ್ರಿಸುವವರನ್ನು ನೋಡಿ)

ಯಶೋಧರೆ—ಹೇಗೆ ಶಾಂತವಾಗಿ ನಿದ್ರಿಸುತ್ತಿರುವಳು! ಮುದ್ದು ರಾಹುಲ—ತನ್ನ ಪುಟ್ಟ ತುಟಿಗಳನ್ನು ಬಿಗಿಹಿಡಿದು, ಹೇಗೆ ನಿದ್ರಿಸುತ್ತಿರುವನು! ಮುಂಬರುವ ದುಃಖ-ನೋವುಗಳ ಅರಿವಿಲ್ಲದೆ ವೈಮರೆವ ಜಗತ್ತಿನ ಪ್ರತಿನಿಧಿಗಳೇ ಇವರು? ಇವರು ಮಾತ್ರ ನನ್ನವರೇ? ಜಗತ್ತಿನ ಜನಕೋಟಿಯು ಯಾರದು? ಎಲ್ಲರೂ ಸಹೋದರ-ಸಹೋದರಿಯರಲ್ಲವೇ? ಯಾರು ಅರಸು, ಯಾರು ಪ್ರಜೆ, ಯಾರು ಪತಿ—ಯಾರು ಪಿತ—ಯಾರು ಪುತ್ರ?

(ಕೊನೆಯ ಬಾರಿ, ಪತ್ನೀಪುತ್ರರನ್ನು ದೃಷ್ಟಿಸಿ)—

ಹಾಯ್! ಹೃದಯ ಕಳವಳಗೊಳ್ಳುತ್ತಿದೆ!

ಯಶೋಧರಾ,-ಇದೋ, ವಿದಾಯ! ರಾಹುಲ,-ಇದೋ ವಿದಾಯ!

(ನಿರ್ಧಾರದಿಂದ,ಬಂಧನ ಕಡಿದುಕೊಂಡು ಹೊರಡುವನು. ಜವನಿಕಾಪತನ)

— ಸಂಪೂರ್ಣ. —

# ಸಿದ್ಧಾರ್ಥನ ಕಾರುಣ್ಯ

(ಹೂದೋಟದ ಮುಂಭಾಗ.)

ಸಿದ್ಧಾರ್ಥ: ಏನು ಸುಂದರ ದೃಶ್ಯವಿದು! ಈ ಪಕ್ಷಿಗಳು ಹಾರಿ ಹೋಗುವಾಗ, ಬಿಳಿಯ ಕಮಲಗಳ ಸರವೇ ಆಕಾಶದಲ್ಲಿ ಹಾರಿಹೋಗುವಂತೆ ತೋರುತ್ತಿದೆ. ಈ ಪಕ್ಷಿಗಳ ಹಾಡಾದರೂ ಅದೆಷ್ಟು ಮಧುರವಾಗಿದೆ! ಗಾಳಿಯೊಳಗಿನಿಂದ ನುಗ್ಗಿ ಹೋಗುವಾಗ ಆಯಾಸದ ಅರಿವಾಗಬಾರದೆಂದು ಅವುಗಳು ಹಾಡುತ್ತಿರಬಹುದೇ? (ಪಕ್ಷಿಯ ಚೀತ್ಕಾರ— ಕರುಣ ಸಂಗೀತ ಸ್ವರ) ಹಾಯ್! ಇದೇನು? ಈ ಹಂಸಗಳ ಮುಂದಳದ ಪಕ್ಷಿಯೇ ಬಿದ್ದು ಬಿಟ್ಟಿತು! ಅದಕ್ಕೊಂದು ಬಾಣವೂ ನೆಟ್ಟುಬಿದ್ದಿದೆ. (ಪುನಃ ಪಕ್ಷಿಯ ಚೀತ್ಕಾರ) ಪಕ್ಷಿರಾಜಾ, ನಿಲ್ಲು. ಹೆದರಬೇಡ, ನಿನ್ನ ಸಹಾಯಕ್ಕೆ ಈ ಸಿದ್ಧಾರ್ಥನು ಸಿದ್ಧನಾಗಿಯೇ ಇದ್ದಾನೆ. (ಪಕ್ಷಿಯ ದೇಹದಿಂದ ಬಾಣವನ್ನು ಹೊರತೆಗೆಯುವನು.) ಅಯ್ಯೋ, ಏನಿದು ರಕ್ತ! ಹಂಸದ ಶರೀರದಿಂದ ಬಾಣವನ್ನು ಹೊರತೆಗೆದಾಕ್ಷಣ ರಕ್ತಸ್ರಾವವು ಇನ್ನೂ ಹೆಚ್ಚೇ ಆಯಿತಲ್ಲ! ಈ ಗಾಯಕ್ಕೆ ಎಲೆಗಳನ್ನಾದರೂ ಜಜ್ಜಿಕಟ್ಟಿಬಿಡುತ್ತೇನೆ. (ಹಾಗೇ ಮಾಡುವನು.) ಹಾಯ್, ಈ ಹಕ್ಕಿಯು ಅದೆಷ್ಟು ಚಡಪಡಿಸುತ್ತಿದೆ! ನಿಶ್ಚಯವಾಗಿಯೂ ಅದಕ್ಕೆ ಬಹಳ ನೋವಾಗಿರಬೇಕು. ಈ ಬಾಣವನ್ನು ನನ್ನ ಮೈಗೇ ಚುಚ್ಚಿಕೊಂಡು ನೋಡಿದರೆ, ಎಷ್ಟು ನೋವಾಗುವುದೆಂದು ತಿಳಿಯುವುದು. (ಬಾಣವನ್ನು ಚುಚ್ಚಿಕೊಳ್ಳುವನು.) ಹೋ, ಎಷ್ಟು ನೋವಾಗುತ್ತದೆ! ಎಲೇ, ದುರ್ದೈವಿ ಹಂಸಪಕ್ಷಿಯೇ, ಈ ಬಾಣವನ್ನು ನನ್ನ ಮೈಗೆ ಒಂದಿಷ್ಟು ತಿವಿದುಕೊಂಡಾಕ್ಷಣ ನನಗೆ ಇಷ್ಟೊಂದು ನೋವಾಗುವಾಗ, ನಿನ್ನ ಕೋಮಲ ಶರೀರದಲ್ಲಿ ನಟ್ಟುಹೋಗಿರುವ ಈ ಕ್ರೂರ ಬಾಣದಿಂದ ನಿನಗೆ ಅದೆಷ್ಟು ವೇದನೆ ಆಗಿರಬಹುದು!–ಆಗುತ್ತಿರಬಹುದು! ನಿನ್ನ ಮೇಲೆ ಬಾಣವೆಸೆಯುವ ನೀಚಕೃತ್ಯವನ್ನು ಅದಾವನು ಮಾಡಿರಬಹುದು!

(ಸೇವಕನ ಪ್ರವೇಶ)

ಸೇವಕ: (ವಂದನೆಮಾಡುತ್ತ) ಯುವರಾಜ ಸಿದ್ಧಾರ್ಥರಿಗೆ ವಿಜಯವಾಗಲಿ.

ಸಿದ್ಧಾರ್ಥ: ಏನು ಸಮಾಚಾರ?

ಸೇವಕ: ಮಹಾರಾಜರೇ, ನನ್ನ ಒಡೆಯರೂ ತಮ್ಮ ಸಹೋದರರೂ ಆಗಿರುವ ದೇವದತ್ತ ಮಹಾರಾಜರು ಅತ್ತ ಪುಷ್ಪವಾಟಿಕೆಯಲ್ಲಿ ಕುಳಿತಿದ್ದಾರೆ. ಅವರು ಪಕ್ಷಿಯನ್ನು ತರಲು ನನಗೆ ಆಜ್ಞಾಪಿಸಿದ್ದಾರೆ.

ಸಿದ್ಧಾರ್ಥ: ದೇವದತ್ತನು ಈ ಪಕ್ಷಿಯನ್ನು ತರಲು ಹೇಳಿದ್ದಾನೆಯೇ?

ಸೇವಕ: ಹೌದು ಮಹಾರಾಜರೇ.

ಸಿದ್ಧಾರ್ಥ: ಏಕೆ?

........ ......... ........

ಸಿದ್ಧಾರ್ಥ: ಈ ಪಕ್ಷಿಯ ಮೇಲೆ ಅವನಿಗೇನು ಹಕ್ಕಿದೆ? ನಾನಿದನ್ನು ಕೊಡುವುದಿಲ್ಲವೆಂದು ಹೇಳು.

(ದೇವದತ್ತನ ಪ್ರವೇಶ)

ದೇವದತ್ತ: ಸಿದ್ಧಾರ್ಥ, ನನಗೇನು ಹಕ್ಕಿದೆಯೆಂದು ವಿಚಾರಿಸಿದೆಯೊ? ಕೇಳು. ನಾನು ಗುರಿಯಿಟ್ಟು ಬಾಣವನ್ನು ಬಿಟ್ಟು ಈ ಹಕ್ಕಿಯನ್ನು ನೆಲಕ್ಕೆ ಕೆಡವಿದ್ದೇನೆ. ಆದ್ದರಿಂದ ಈ ಹಕ್ಕಿಯ ಮೇಲೆ ನನ್ನದೇ ಹಕ್ಕು. ನನಗೆ ಈ ಹಕ್ಕಿಯ ಗರಿಗಳಿಂದ ನನ್ನ ಕಿರೀಟವನ್ನು ಶೃಂಗರಿಸಿಕೊಳ್ಳುವ ಬಯಕೆಯಾಗಿದೆ. ನಾನು ಇದರ ಕೋಮಲ ಸ್ವಾದಿಷ್ಟ ಮಾಂಸದ ಮೋಜವಾನಿಯನ್ನು ಮಾಡಬೇಕೆಂದಿರುವೆನು. ಆದುದರಿಂದ ಇದನ್ನು ನನಗೆ ಕೊಟ್ಟು ಬಿಡು.

ಸಿದ್ಧಾರ್ಥ: ಹಾಯ್, ಪಾಪಿ, ದೇವದತ್ತಾ, ಈ ಸುಕುಮಾರ ಪಕ್ಷಿಯ ಮೇಲೆ ಬಾಣವನ್ನು ಬಿಡಲು ನಿನಗೆ ಕೈಯಾದರೂ ಹೇಗೆ ಬಂತು! ಇದು ಮಾನಸ ಸರೋವರದಲ್ಲಿಯ ತನ್ನ ನಿವಾಸಸ್ಥಾನಕ್ಕೆ ಹೋಗುತ್ತಲಿತ್ತು. "ನನ್ನ ಹೆಂಡತಿ, ಮಕ್ಕಳನ್ನು ಕಾಣುವೆನು; ನನ್ನ ಹೆಂಡತಿಯು ನನ್ನ ದಾರಿ ಕಾಯುತ್ತಲೇ ಕುಳಿತಿರಬಹುದು," ಎಂಬ ಯೋಚನೆಯಲ್ಲಿ ಇದು ವೇಗವಾಗಿ ಹಾರಿಹೋಗುತ್ತಲಿತ್ತು ತನ್ನ ಇಷ್ಟಮಿತ್ರರೊಡನೆ ಕೂಡಿಕೊಂಡು, ಏನೇನು ಮಾಡಬೇಕೆಂಬ ಕಾರ್ಯಕ್ರಮವನ್ನು ಅದು ಯೋಚಿಸುತ್ತಲಿತ್ತು. ಆದುದರಿಂದಲೇ ಅದು ಲಗುಬಗೆಯಿಂದ, ಉಳಿದೆಲ್ಲ ಹಂಸಗಳಿಗಿಂತ ಮುಂದೆ ನಡೆದಿತ್ತು. ಇಂಥ ಆನಂದಸಾಗರದಲ್ಲಿ ಅದು ತೇಲಾಡುತ್ತಿದ್ದಾಗ ನೀನು ಅದಕ್ಕೆ ಬಾಣ ಹೊಡೆದು ಕೆಡವಿಬಿಟ್ಟೆ! ಆದರಿಂದ

ಅದಕ್ಕೆ ಎಷ್ಟು ಆಘಾತವಾಗಿರಬೇಕು! ಅದರ ಜತೆಯ ಪಕ್ಷಿಗಳಂತೂ ಮಾನಸ ಸರೋವರಕ್ಕೆ ತಲಪುವುವು. ಆಗ ಅವುಗಳು ಅದರ ಹೆಂಡತಿ, ಮಕ್ಕಳಿಗೆ ಏನು ಸಮಾಚಾರವನ್ನು ಹೇಳಬೇಕು?

ದೇವದತ್ತ: ಯುವರಾಜ ಸಿದ್ಧಾರ್ಥ, ನಿನ್ನ ದಯಾಧರ್ಮದ ಪ್ರವಚನವನ್ನು ಸಾಕುಮಾಡು. ನನಗದು ಬೇಕಾಗಿಲ್ಲ. (ಉಪಹಾಸದಿಂದ) ನಿನ್ನ ಮನಸ್ಸು ಅಷ್ಟೊಂದು ಕೋಮಲವಿರುವುದಾದರೆ, ಈ ಸಿಂಹಾಸನದ ಮೋಹವನ್ನು ಬಿಟ್ಟುಬಿಟ್ಟು, ಭೂತದಯೆಯ ವ್ರತವನ್ನೇ ತೆಗೆದುಕೊಂಡು ಬಿಡಬಹುದಲ್ಲ! ಮೊದಲು ನನ್ನ ಹಕ್ಕಿಯನ್ನು ನನಗೆ ಕೊಟ್ಟುಬಿಡು.

ಸಿದ್ಧಾರ್ಥ: ದೇವದತ್ತಾ, ಸುದೈವದಿಂದ ನಿನ್ನ ಬಾಣವು ತನ್ನ ಕೆಲಸವನ್ನು ಮಾಡಿಬಿಡಲಿಲ್ಲ. ಈ ಹಕ್ಕಿಯಲ್ಲಿ ಇನ್ನೂ ಸ್ವಲ್ಪ ಜೀವವಿದೆ. ಇದು ಸತ್ತುಹೋಗಿದ್ದೇ ಆದರೆ ಇದನ್ನು ನಿನಗೇ ಕೊಟ್ಟುಬಿಡಬಹುದಾಗಿತ್ತು. ಆದರೆ ಇದಿನ್ನೂ ಬದುಕುವ ಆಶೆಯಿದೆ. ನಾನು ಸರ್ವಪ್ರಯತ್ನ ಮಾಡಿ ಇದನ್ನು ಬದುಕಿಸಿ ಕೊಳ್ಳುವೆನು. ಇದು ಗುಣಹೊಂದಿ ತನ್ನ ಮನೆಗೆ ಹಾರಿಹೋಯಿತೆಂದರೆ ನನಗೆ ಅಪರಿಮಿತ ಆನಂದವಾಗುವುದು; ವಿಚಾರ ಮಾಡಿದರೆ ನಿನಗೂ ಹಾಗೆಯೇ ಅನಿಸೀತು.

ದೇವದತ್ತ: (ತಿರಸ್ಕಾರದಿಂದ) ಛೇ, ಆಕಾಶದಲ್ಲಿ ಹಾರುವ ಈ ಕ್ಷುದ್ರ ಪಕ್ಷಿಯ ಮೇಲೆ ನಿನ್ನದೇನು ಅಧಿಕಾರ? ನಾನು ಬಾಣವನ್ನು ಬಿಟ್ಟು ಇದನ್ನು ಕೆಡವಿದ್ದರಿಂದ ಇದು ನನ್ನದಾಗಲಿಲ್ಲವೇ? ಇದನ್ನು ನನಗೆ ಕೊಟ್ಟು ಬಿಡು.

ಸಿದ್ಧಾರ್ಥ: ಇಲ್ಲ ದೇವದತ್ತಾ ಇಲ್ಲ, ಸಾಯಲುಬಿದ್ದ ಈ ಪಕ್ಷಿಯನ್ನು ನಾನೆಂದೂ ಬಿಟ್ಟುಕೊಡಲಾರೆ. ನನ್ನ ಜೀವಮಾನದಲ್ಲಿ ಮುಂದೆ ಏನು ಮಾಡಬೇಕೆಂಬುದನ್ನು ನಾನು ಈಗಾಗಲೇ ನಿಶ್ಚಯಿಸಿಬಿಟ್ಟಿದ್ದೇನೆ.

ದೇವದತ್ತ: ನೀನು ಈ ಹಕ್ಕಿಯನ್ನು ಬಿಟ್ಟುಕೊಡುವುದಿಲ್ಲವೆಂದು ನಿರ್ಧಾರ ಮಾಡಿರುವಿಯಾದರೆ, ನಾನು ಈ ದೂರನ್ನು ನ್ಯಾಯಸ್ಥಾನಕ್ಕೆ ಒಯ್ಯುವೆನು. ಆಗ ನೀನು ಇದನ್ನು ನನಗೆ ಕೊಡಲೇ ಬೇಕಾಗುವುದು.

ಸಿದ್ಧಾರ್ಥ: ನಾನು ನಿರ್ಧಾರಮಾಡಿದ್ದರೂ ಕೂಡ ನ್ಯಾಯಾಲಯದ ನಿರ್ಣಯವನ್ನು ನಾನು ನಿಶ್ಚಯವಾಗಿಯೂ ಪಾಲಿಸುವೆನು. ಆದರೆ ನ್ಯಾಯಾಧೀಶರು ನನ್ನ ಪರವಾಗಿಯೆ ನಿರ್ಣಯಕೊಡುವರೆಂಬ ಭರವಸೆಯು ನನಗಿದೆ. ನಾವಿಬ್ಬರೂ ನ್ಯಾಯಾಲಯಕ್ಕೆ ಹೋಗೋಣ, ನಡೆ. (ಹೋಗುವರು.)

(ನ್ಯಾಯಾಸ್ಥಾನ)

ಮುಖ್ಯ ನ್ಯಾಯಾಧೀಶ: ಯುವರಾಜ ಸಿದ್ಧಾರ್ಥ, ರಾಜಕುಮಾರ ದೇವದತ್ತಾ, ಇಬ್ಬರೂ ಬನ್ನಿರಿ. ಈ ನ್ಯಾಯಸಭೆಯಲ್ಲಿ ತಮ್ಮ ಬರೋಣ ವೇಕಾಯಿತು?

ದೇವದತ್ತ: ನ್ಯಾಯಸ್ಥಾನದಲ್ಲಿ ನನ್ನದೊಂದು ಅರಿಕೆಯಿದೆ.

ಮುಖ್ಯ ನ್ಯಾಯಾಧೀಶ: ಅದೇನೆಂದು ಹೇಳೋಣಾಗಲಿ.

ದೇವದತ್ತ: ಅರಮನೆಯ ಹೂದೋಟದ ಮೇಲಿಂದ ಹಂಸಪಕ್ಷಿಗಳ ಸಮೂಹವೊಂದು ಹಾರಿಹೋಗುತ್ತಿತ್ತು. ನಾನೊಂದು ಬಾಣವನ್ನು ಬಿಟ್ಟು ಒಂದು ಪಕ್ಷಿಯನ್ನು ಹೊಡೆದು ಕೆಡವಿದೆನು. ಆ ಪಕ್ಷಿಯು ಯುವರಾಜ ಸಿದ್ಧಾರ್ಥನ ಕೈಯಲ್ಲಿ ಬಿತ್ತು. ಅದು ನನ್ನ ಹಕ್ಕಿನ ಬೇಟೆಯಿದ್ದೂ, ಯುವರಾಜ ಸಿದ್ಧಾರ್ಥನು ಅದನ್ನು ನನಗೆ ಕೊಡುವುದಿಲ್ಲವೆಂದು ಹೇಳುತ್ತಾನೆ. ನನ್ನ ಬೇಟೆಯು ನನಗೆ ಸಿಗಬೇಕೆಂಬುದೇ ನನ್ನ ಹೇಳಿಕೆಯಾಗಿದೆ. ಸಿದ್ಧಾರ್ಥನು ಯುವರಾಜನು; ನಾನು ಸಾಮಾನ್ಯ ರಾಜಕುಮಾರನು. ಆದುದರಿಂದ ಪಕ್ಷಪಾತವಾಗದಿರಲಿ.

ಮುಖ್ಯ ನ್ಯಾಯಾಧೀಶ: ದೇವದತ್ತಾ, ಕಪಿಲವಸ್ತುವಿನ ನ್ಯಾಯಾಲಯದಲ್ಲಿ ಎಂದೆಂದೂ ಪಕ್ಷಪಾತವು ನಡೆಯದು. ಕಾಯದೆಯ ದೃಷ್ಟಿಯಲ್ಲಿ ಯುವರಾಜನು ದೋಷಿಯೆಂದಾದರೆ, ಅವನಿಗೂ ಯೋಗ್ಯ ಶಿಕ್ಷೆಯು ಆಗಿಯೇ ಆಗುವುದು. (ಸಿದ್ಧಾರ್ಥನ ಕಡೆಗೆ ತಿರುಗಿ.) ಯುವರಾಜಾ, ನಿನ್ನ ಹೇಳಿಕೆಯೇನು? ದೇವದತ್ತನು ಮಾಡಿದ ಆರೋಪವು ಮಾನ್ಯವಿದೆಯೇ?

ಸಿದ್ಧಾರ್ಥ: ಇಲ್ಲ. ಈ ಪಕ್ಷಿಗೆ ಇನ್ನೂ ಜೀವವಿದೆ. ನಾನು ಇದನ್ನು ಬದುಕಿಸಿಯೇ ತೀರುವೆನು.

ಮುಖ್ಯ ನ್ಯಾಯಾಧೀಶ: ಆದರೆ, ರಾಜಕುಮಾರನು ಇದು ತನ್ನದೇ ಎಂದು ಸ್ವಾಮಿತ್ವ ಪ್ರತಿಪಾದಿಸುವನಲ್ಲವೆ?

ಸಿದ್ಧಾರ್ಥ: ನಾನೇ ಇದರ ಆಪ್ತನೆಂದು ನನ್ನ ಮನಸ್ಸೇ ನನಗೆ ಹೇಳುತ್ತಿದೆ. ಈ ಪಕ್ಷಿಯು ನನ್ನದು.

ಮುಖ್ಯ ನ್ಯಾಯಾಧೀಶ: ಮೊದಲು ಅದು ಯಾರೊಬ್ಬರ ವಸ್ತು ಆಗಿರಲಿಲ್ಲ. ರಾಜಕುಮಾರ ದೇವದತ್ತನೇ ಅದನ್ನು ನೆಲಕ್ಕೆ ಕೆಡವಿದನು. ಆದುದರಿಂದ ಅದು ಅವನಿಗೇ ಸಿಗುವುದು ನ್ಯಾಯವಾಗಿದೆ.

("ಸರಿ, ಸರಿ," "ಅಲ್ಲ, ಅಲ್ಲ," ಎಂಬ ಕೂಗುಗಳು)

ಮುಖ್ಯ ನ್ಯಾಯಾಧೀಶ: ಶಾಂತರಾಗಿರಿ, ಶಾಂತರಾಗಿರಿ. ಇದು ನ್ಯಾಯಮಂದಿರವಿದೆ. ಇಲ್ಲಿ ಯಾರೂ ಗದ್ದಲಮಾಡಬಾರದು. (ಸಿದ್ಧಾರ್ಥನ ಕಡೆಗೆ ತಿರುಗಿ) ಯುವರಾಜ ಸಿದ್ಧಾರ್ಥ, ಈ ಪಕ್ಷಿಯ ಜೀವವನ್ನುಳಿಸಬೇಕೆಂದು ನಿನ್ನ ಕೋಮಲ ಮನಸ್ಸಿಗೆ ಅನಿಸುವುದು ಸ್ತುತ್ಯವಿದೆ. ಆದರೆ ಅಷ್ಟು ಮಾತ್ರಕ್ಕೆ ಅದರ ಮೇಲೆ ನಿನಗೆ ಅಧಿಕಾರವಿದೆಯೆಂದು ಸಿದ್ಧವಾಗುವುದಿಲ್ಲ. ದೇವದತ್ತನ ಹೇಳಿಕೆಯೇ ಯೋಗ್ಯವಾಗಿದೆ.

ಎಲ್ಲ ನ್ಯಾಯಾಧೀಶರು: ನಮಗೂ ಸಹ ಹಾಗೆಯೇ ಅನಿಸುತ್ತದೆ.

ಮುಖ್ಯ ನ್ಯಾಯಾಧೀಶ: ಸರಿ, ಸರಿ. ನಿಮ್ಮಿಬ್ಬರ ಪಕ್ಷಗಳೂ ನ್ಯಾಯಸ್ಥಾನದ ಮುಂದೆ ಬಂದಿವೆ. ಶುದ್ಧೋಧನ ಮಹಾರಾಜರ ಈ ರಾಜ್ಯದಲ್ಲಿ ಕಾಯದೆಗಳು ಎಂದೂ ಭೇದಭಾವವನ್ನು ಎಣಿಸುವುದಿಲ್ಲ. ಯುವರಾಜನಾದರೂ ತಪ್ಪಿದ್ದರೆ, ಅವನ ವಿರುದ್ಧ ತೀರ್ಪು ಕೊಡುವುದೇ ಈ ರಾಜ್ಯದ ಉಚ್ಚ ಪರಂಪರೆಗೆ ಅನುಗುಣವಾಗಿದೆ. ಆದುದರಿಂದ ನಾನು ತೀರ್ಪು ಕೊಡುತ್ತೇನೆ—

(ಒಬ್ಬ ಸತ್ಪುರುಷನು ಪ್ರಕಟವಾಗುತ್ತಾನೆ.)

ಸತ್ಪುರುಷ: ತಡೆಯಿರಿ, ತಡೆಯಿರಿ. ಅನ್ಯಾಯ ಮಾಡಬೇಡಿರಿ. ಯುವರಾಜ ಸಿದ್ಧಾರ್ಥನ ಪಕ್ಷವೇ ನ್ಯಾಯವಾಗಿದೆ ಯಾವದೊಂದು ಪ್ರಾಣಿಯ ಜೀವವನ್ನೇ ತೆಗೆಯಲೆತ್ನಿಸುವವನು ಎಂದಾದರೂ ಅದರ ಯಜಮಾನನಾಗಬಲ್ಲನೇ? ಜೀವವನ್ನು ಉಳಿಸುವವನೇ ಅದರ ಸ್ವಾಮಿಯಾಗಬಲ್ಲನು. ಕೊಲ್ಲುವವನು ಜಗತ್ತನ್ನು ಸ್ಮಶಾನವಾಗಿ ಮಾಡುತ್ತಾನೆ. ಸಂರಕ್ಷಿಸುವವನಿಂದಲೇ ಸೃಷ್ಟಿಯು ಸಮೃದ್ಧವಾಗುತ್ತದೆ. ಆದುದರಿಂದ ಸಂರಕ್ಷಿಸುವವನೇ ಶ್ರೇಷ್ಠನು. ಈ ಪಕ್ಷಿಗೆ ಬಾಯಿ ಇದ್ದಿದ್ದರೆ ಇದೇ ಒದರಿ

ಹೇಳುತ್ತಿತ್ತು: "ಸಿದ್ಧಾರ್ಥನೇ ನನ್ನ ಒಡೆಯ, ಸಿದ್ಧಾರ್ಥನೇ ನನ್ನ ಒಡೆಯ, ಸಿದ್ಧಾರ್ಥನೇ ನನ್ನ ಒಡೆಯ." (ಸತ್ಪುರುಷನು ಹೊರಟು ಹೋಗುವನು.)

ಮುಖ್ಯ ನ್ಯಾಯಾಧೀಶ: ಯುವರಾಜ ಸಿದ್ಧಾರ್ಥ, ಕ್ಷಮಿಸು, ಕ್ಷಮಿಸು. ನಾವು ನಿನ್ನ ವಿರುದ್ಧ ತೀರ್ಪು ಕೊಡಲು ಹೊರಟಿದ್ದೆವು. ಆದರೆ ಸುದೈವವು ಅದನ್ನು ತಪ್ಪಿಸಿತು. ನಿನ್ನ ಹೇಳಿಕೆಯೇ ಸರಿಯಿದೆ. ಈ ಪಕ್ಷಿಯನ್ನು ನೀನೇ ತೆಗೆದುಕೊಳ್ಳು. ನಿನ್ನಂಥ ಉದಾರಹೃದಯದ ರಾಜನು ದೊರೆಯುವನೆಂದು ಪ್ರಜೆಗಳಿಗೆ ಆನಂದವಾಗಿದೆ.

('ಯುವರಾಜ ಸಿದ್ಧಾರ್ಥನಿಗೆ ಜಯವಾಗಲಿ,' ಎಂಬ ಜಯಘೋಷಗಳು.)



Edited, Printed & Published by K. V. Shenoy
at The Prabhat Printers, Ltd., Mangalore.